# ಹಳ್ಳಿಯ ಹಾಡುಗಳು.

ಸಂಗ್ರಾಹಕ ಮತ್ತು ಪರಿಶೋಧಕ:—

**ವಿ. ವೆ. ತೊರ್ಕೆ.**

ಉಪಶಿಕ್ಷಕ ಕನ್ನಡ ಶಾಳಾ ತೊರ್ಕೆ.



೧೯೩೩.

ಇದನ್ನು ನಾರಾಯಣ ಸುಬ್ರಹ್ಮಣ್ಯ ಶಾಸ್ತ್ರೀ ಭಡತಿ ಇವರು ತಮ್ಮ
" ಶ್ರೀ ನಂದಿನೀ ಮುದ್ರಣಾಲಯ, ಶ್ರೀಕ್ಷೇತ್ರ ಗೋಕರ್ಣ "
ಇಲ್ಲಿ ಮುದ್ರಿಸಿದರು; ಹಾಗೂ
ವಿಠೋಬಾ ವೆಂಕ ನಾಯಕ ತೊರ್ಕೆ,
ಉಪಶಿಕ್ಷಕ ಕನ್ನಡಶಾಳಾ ತೊರ್ಕೆ,
ಇವರು ತೊರ್ಕೆಯಲ್ಲಿ ಪ್ರಕಟ ಮಾಡಿದರು.

## ಬರೆದು ಬಂದ ಅಭಿಪ್ರಾಯ

Mangalore,
5 - 11 - 33.

Dear mr. Forke,

*I thank you for the complimentary copies of your* ಹಳ್ಳಿಯ ಹಾಡುಗಳು. *These are the pretty* ತ್ರಿಪದಿಗಳು *which will live in Karnataka like the* ವಚನಗಳು *of* ಸರ್ವಜ್ಞ. *There is a rustic note about them which is really pleasing and he who reads them will never forget them.*

*Thanking you once more,*

*I remain,*
*Yours Sincerely,*

(Sd.) P. Mangesh Rao.

ರಿಸಿ ಹೆಣೆದು ಅಚ್ಚುಮೆಚ್ಚಾಗಿ ಹಾಡುತ್ತಿರುವುದನ್ನು ಆಲಿಸಿದೆ. ಈ ಹಾಡು ಗಳನ್ನು ಕೂಡಿಸಿ ಕನ್ನಡಿಗರ ಮುಂದಿಡುವುದಕ್ಕೆ ಹವಣಿಸಿದೆ. ಆ ನನ್ನ ಬಗೆಯ ಬಯಕೆಯೇ ಇದು. ನನ್ನ ಹಳ್ಳಿಯ ಅಕ್ಕ-ತಂಗಿಯರು ಹಾಡು ವ ಹಾಡುಗಳಲ್ಲಿರುವ ಕೆಲವು ತೊಡಕಿನ ನುಡಿಗಳನ್ನು ಬದಿಗಿರಿಸಿ ಕೈ ಯಿಂದ ನಾಲ್ಕು ನುಡಿಗಳನ್ನು ಬದಲಾಗಿರಿಸಿ ಈ ಹೊತ್ತಿಗೆಯಲ್ಲಿರುವ ರ

ಪಕ್ಕೆ ತಂದು ಕನ್ನಡಮ್ಮಗೆ ಅರ್ಪಿಸಿದ್ದೇನೆ. ಓದುಗರು ಈ ಹಾಡುಗಳನ್ನು ಹಾಡಿ ಹಳ್ಳಿಯ ಕನ್ನಡಿತಿಯರ ಜಾಣ್ಮೆಯನ್ನು ಕಂಡು ನಲಿಯುವರೆಂಬ ಹೆಬ್ಬಾಸೆಯಿದೆ.

---

ನನ್ನ ಕಿರಿದರಿವಿನಿಂದ ಅಪ್ಪಿತಪ್ಪಿ ಇದರಲ್ಲಿ ಉಳಿದಿರಬಹುದಾದ ತಪ್ಪು-ತಡೆಗಳನ್ನು ಅರುಹಿ ನೆರವಾಗಬೇಕೆಂದು ಬಲ್ಲವರನ್ನು ಬಿನ್ನಯಿ-ಸುವೆನು.

ಈ ಚಿಕ್ಕ ಹೊತ್ತಿಗೆಯು ಉಪಯುಕ್ತವೆನಿಸಿದರೆ ಇನ್ನೊಂದು ಸಲ ಹಳ್ಳಿಯ ಕನ್ನಡಿತಿಯರನ್ನು ಬೇಡಿ ಇನ್ನುಳಿದ ಹಾಡುಗಳನ್ನು ಕೂಡಿಸಿ ಅಚ್ಚು ಮಾಡಿಸಬೇಕೆಂದು ನನ್ನಬಗೆಯು ಇಚ್ಛೈಯಿದೆ.

ಕನ್ನಡಮ್ಮನ ಅಡಿಯಾಳು,

೩೧ - ೧೦ - ೧೯೩೩. ತೊರ್ಕೆ.

# ಹಳ್ಳಿಯ ಹಾಡುಗಳು.

॥ ತ್ರಿಪದಿ ॥

೧.

ಮುಡಿಯಹಾಳ ಮುಪ್ಪಾದರೆ ಪರಿಮಳ ಬಿಡುವುದೆ!
ದೊರೆಯ ಮಕ್ಕಳಿಗೆ ಬಡತನ ಬಂದರೆ
ದೊರೆತನದ ಠೀವಿ ಬಿಡುವುದೆ!

++ ++ ++ ++

೨.

ಅತ್ತೆಗೆ ಸೊಸೆ ಮೂಲ ಹಿತ್ತಲಕೆ ಕರುಮೂಲ
ಹೆತ್ತಮ್ಮಗೆ ಮೂಲ ಹಿರಿಮಗ; ಮೂಡಿಬಹ
ಸೂರ್ಯಗೆ ಮೂಲ ಗರಣವೇ.

++ ++ ++ ++

೩.

ಗಂಡನ ಗುಣವೇನೆ ಗುಂಡಿಯ ನೆಲೆಯೇನೆ
ಕೆಂಡ ಮಜ್ಜಿಗೆಯ ರುಚಿಯೇನೆ ಅಕ್ಕಮ್ಮ
ಗಂಡನ ಗುಣವೇ ಅವಗುಣ.

++ ++ ++ ++

೪.

ಗಂಡನ ಗುಣವನ್ನು ಕಂಡೆನೆಂದಳು ಜಾಣೆ
ಮುಂಡ್ಕೀಲಿ ಮೇವ ಬಸವನ ಹೆಜ್ಜೆಯ
ಕಂಡವಳಿನ್ನೆಂತ ಕಡುಜಾಣೆ.

++ ++ ++ ++

೫.

ಅಜ್ಜ ಅಜ್ಜಿಗೆ ಮುದ್ದು ಗೆಜ್ಜೆ ಕಾಲಿಗೆ ಮುದ್ದು
ಹಣ್ಣುಳ್ಳ ಮರಕೆ ಗಿಣಿ ಮುದ್ದು ಬಾಲಯ್ಯ
ನೀ ಮುದ್ದು ನಿನ್ನ ಬಳಗಕ್ಕೆ.

++ ++ ++ ++

೬.

ಗಂಡನೇ ಇದ್ದರೆ ಗಂಧವ ಇಡಬಹುದು
ಮಂಡೆಗೆ ಚೌಲಿ ಕಿವಿಗೋಲೆ ಇದ್ದರೆ
ದಂಡು ನಾಯಕನ ಗೆಲಬಹುದು.

++ ++ ++ ++

೭.

ತಾಯಿದ್ರೆ ತಗರೂರು ನೀರಿದ್ರೆ ಹೆಗ್ಗೆರೆ
ಆನೆಯಿಂದ್ರರಸು ದೊರೆತನ ತಾಯಮ್ಮ
ನೀನಿದ್ರೆ ತಗ್ರುಮನೆ ಲೇಸು.

++ ++ ++ ++

೮.

ಅತ್ತೆ ಸತ್ತರೆ ಸೊಸೆಯು ಏನೆಂದು ಮರಗುವಳು
ಹಿತ್ತಲದ ಕದವ ತಡಕೊಂಡು ನಮ್ಮನೆಯ
ಮಿತ್ತು ದೇವತೆಯೇ ತೊಲಗಿತು.

++ ++ ++ ++

೯.

ತಾಯಿ ಸತ್ತರೆ ಮಗಳು ಏನೆಂದು ಮರಗುವಳು?
ಬಾಗಿಲದ ಕದವ ತಡಕೊಂಡು ನಮ್ಮನೆಯ
ಭಾಗ್ಯ ಲಕ್ಷ್ಮಿಯೇ ತೊಲಗಿತು.

++ ++ ++ ++

೧೦.

ಸೂಳೇರಿಗ್ಹೋದವನ ಸುಡು ಅವನ ಜನ್ಮವ
ನಾಳೆ ನೋಡವನ ಬವಣೆಯ ಅಕ್ಕಮ್ಮ
ತೇರಿನ ಬೀದಿಲಿ ಉಗಿಯುವಾಗ.

++ ++ ++ ++

೧೧.

ತಂಗಿಯ ಕರತಾರೊ ಹಿಂಗಾರ ಮುಡ್ದವಳ
ನಿಂಗಕ್ಕಗ್ನಿಯ ಇಡ್ದವಳ ತಂಗಿಯನು
ತಿಂಗಳಿಗೊಂದ್ಸಾರೆ ಕರತಾರೋ.

++ ++ ++ ++

೧೨.

ಅಕ್ಕ ತಂಗ್ದಿರು ನಾವು ಹೆಚ್ಚಿನ ಗರ್ತಿರು
ಸಕ್ಕರೆಯ ನಡುವೆ ಕರಿಯೆಳ್ಳು ಹೊಯ್ದಂತೆ
ಅಕ್ಕಮ್ಮ ಕುದುರನರಿಯಳು.

++ ++ ++ ++

೧೩.

ಎಂಟೆಂಟು ದಿವಸಕ್ಕೆ ಸಂತೆ; ಅಪ್ಪನಮನೆ
ಚಿಂತಿಸಬೇಡ ಕಿರಿದಂಗಿ ಪಾರ್ವತಿ
ಸಂತೋಷ ಕೇಳೆ ತಗರೂರ.

++ ++ ++ ++

೧೪.

ಗಂಡನ ಮನೆಲಿದ್ದ ಕಂಡರೇಂ ಬಾಲೆಯ
ಮಂಡೆ ಮೂರುದ್ದ ಸೆಳಗಂಟ ಹೊಯ್ದುಕೊಂಡು
ಗಿಂಡಿಲಿ ಹಾಲ ಕರೆವವಳ.

++ ++ ++ ++

೧೫.

ಆರುದ್ದ ಮಂಡೆಯು ಮೂರುದ್ದ ಸೆಳಗಂಟು
ಈ ಮಂಡೆ ಮಾಸಿ ಇರಲಾರೆ ಅಪ್ಪಯ್ಯ
ಗಾಣಗಿತ್ತಿ ಬೇಕೋ ಮನಯಲ್ಲಿ.

++ ++ ++ ++

೧೬.

ಅಣ್ಣ ತಮ್ಮನ ಬಿಲ್ಲು ನಿಂತವಂಗಳದಲ್ಲಿ
ಅಣ್ಣಸಿಲ್ಲದ ತಮ್ಮ ಕಡು ಪಾಪಿ ಬಿಲ್ಹೋಗಿ
ನಿಂತವು ಬೇಸಗೆಯ ಬಿಸಲಲ್ಲಿ.

++ ++ ++ ++

೧೭.

ಎಣ್ಣೆ ಕುಡಕಿಗೆ ಬೀಗ ತಣ್ಣೆ ಮಡಕೆಗೆ ಬೀಗ
ಮತ್ತು ನಮ್ಮತ್ತೆ ಕೈಬೀಗವಾದರೂ
ಮತ್ತೂ ನಮ್ಮಾವನ ಕಟಕಟಿ—
ನಾನ್ ಹೇಗೆ ಕಾಲ ಕಳೆಯಲಿ?

++ ++ ++ ++

೧೮.

ಮುತ್ತು ಬಂತೇ ಮನೆಗೆ ರತ್ನ ಬಂತೇ ಮನೆಗೆ
ಅತ್ತೆ ನಿನ್ನ ಮನೆಗೆ ಸೊಸೆ ಬಂತೆ ಅದರಿಂದ
ನೆಟ್ಟ ತೆಂಗೆಲ್ಲ ಫಲ ಬಂತು.

++ ++ ++ ++

೧೯.

ಮಾವನ ಮಗ ಮರ ಹತ್ತಿ ಮಲ್ಲಿಗೆ ಕೊಯ್ದು
ಯಾರು ಬೇಡಿದರೂ ಕೊಡೆನೆಂದ ಮೈದುನ
ಅತ್ತಿಗೆ ಬೇಡಲು ಮುಡಿಯೆಂದ.

++ ++ ++ ++

೨೦.

ಅಗಸಿಯ ಹೊಳೆಯಲ್ಲಿ ಜಗಶರದ ಮಲ್ಲಿಗೆ
ಕೊಯ್ತಾರೋ ತಮ್ಮ ಸೆರೆ ತುಂಬ ನಿನ್ನಕ್ಕನ ಮಗಳು
ಬಗ್ತಲೆ ಮುಟ್ಟಿ ಮುಡಿವಳು.

++ ++ ++ ++

೨೧.

ಸೇವಂತಿಗೆ ದುರ್ಗದ ಠಾಣ್ಯದ ತಮ್ಮಯ್ಯನು
ರಾಣಿಯು ಬಿಟ್ಟು ಬರೆನೆಂದ ತಾ ತೊಟ್ಟ
ಕತ್ತಿಯ ಮೇಲೆ ರುಹ ಬರೆದ.

++ ++ ++ ++

೨೨.

ಹಗಲಿಗೆ ಕಂದನ ಮಾಡಿ ರಾತ್ರಿಗೆ ಜೋಗುಳ ಪಾಡಿ
ಹರಿಹರನೆಂಬ ಹೆಸರಿಟ್ಟ ಬಾಲಯ್ಗೆ
ಸಿರಿದೇವಿ ಕಂದ ಸುಖ ಬಾಳೋ.

++ ++ ++ ++

೨೩.

ಬಾಲರಿಲ್ಲದ ಬಾಳ್ವೆ ಬಾಳೆಯಿಲ್ಲದ ತೋಂಟ
ಗಂಧ ಕಸ್ತೂರಿ ಪರಿಮಳದೊಳಗಿದ್ದ
ರಂಭೆ ಸೀಂ ಬಾಳೆ ಫಲಪಿಲ್ಲ.

++ ++ ++ ++

೨೪.

ಹಾಲ ಕುಡಿಯಲು ಬಾರೊ ಬಾಲಕೃಷ್ಣನೆ ಬಾರೊ
ಗೋವಿಂದ ಬಾರೋ ಹರಿ ಬಾರೋ ತೊಟ್ಟಿಲದ
ಕಂದಯ್ಯ ಹಾಲ ಕುಡಿ ಬಾರೋ.

++ ++ ++ ++

೨೫.

ಹಾಲಂಡೆ ತಕ್ಕೊಂಡು ಹಾಲ ಕರೆಯಲು ಹೋದೆ
ಯಾಕೆ ಸಿರಿ ಕೌಲಿಯೊರಗಿದೆ ನಿನ್ನೊಡೆಯರು
ಹಾಲಿಲ್ಲದುಣರು ಹಗಲೂಟ.

++ ++ ++ ++

೨೬.

ಆಡುವರಿಲ್ಲದೆ ಅಂಗಳ ಭಿನ್ನಾದವು
ಹೂಡಿದರು ಹೊನ್ನ ಬೊಗರೆಯ ಹುಯ್ಲುದ ಮೇಲೆ
ಮೊಮ್ಮಕ್ಕಳಾಡಿದರು ಧೂಳೆದ್ದು.

++ ++ ++ ++

೨೭.

ಹೆಸರು ಬಾಲಯ್ಗೆ ಅಜ್ಜ ದೇವೇಂದ್ರನ
ನೊಸಲ ಮೇಲ್ ಪದ್ಮವೊಲಿದವು ನಿನ್ನಯ
ಹೆಸರಿಟ್ಟ ಬಾಲನ ತಲೆಗಾಯೊ.

++ ++ ++ ++

೨೮.

ಕಾಣ್ಕೆ ಬಂದವು ಐದು ತೆಂಗಿನ ಕಾಯಿಗಳು
ಯಾರ್ಯಾರಿಗೊಂದ ಕಳುಹಲಿ ನನ್ನಮ್ಮ
ಬೇರು ಬಿಟ್ಟಂತೆ ಬಳಗವು.

++ ++ ++ ++

೨೯.

ಹೆಣ್ಣಿಲ್ಲದವ್ಮನ ಹೆಣ ಚಂದವಿಲ್ಲವು
ಬಣ್ಣದ ನಿರಿಯ ಸೊಸೆದಿರು ಹಿಡಿದರೆ
ಕಣ್ಣಿನ ಕಾಡಿಗೆ ಉಲಚವು.

++ ++ ++ ++

೩೦.

ಅತ್ತಿಗೆ ನೀ ಬಾರೆ ಹತ್ತು ತಿಂಗಳುಳಿಯೆ
ಹತ್ತೆಮ್ಮೆ ಹಾಲ ಕರೆದುಣ್ಣೆ ಅತ್ತಿಗೆ
ಪುತ್ರರಿಗೆ ಹೆಣ್ಣ ಕೊಡಬಹುದು.

++ ++ ++ ++

೩೧.

ಬಾಲನ ಹೆರುವಾಗ ಬಾಡೀವ್ಮನ ಮೊಗ
ಬಾಲ ಚಂಡಾಡಿ ಬರುವಾಗ ಅವ್ಮನ ಮೊಗ
ಕುಂದಣದ ಚಿನ್ನ ಹೊಳೆದಂತೆ.

++ ++ ++ ++

೩೨.

ಕಂದಯ್ಯ ಕಾಡುವ ಕೆಂದಿ ನೊರೆ ಹಾಲಿಗೆ
ನಂದಾ ದೀವಿಗೆಯ ಬೆಳಕಿಗೆ ಬಾಲಯ್ಯ
ತಾನೆದ್ದು ಕಾಡುವ ಇರುಳೆದ್ದು.

↔ ↔ ↔ ↔

೩೩.

ನಾರಿಯ ಮಂಡೆಯ ಕೂದಲು ಆರುದ್ದ ಮೂರುದ್ದ
ಇನ್ನ್ಯಾರು ಕಟ್ಟಲರಿಯರು ತಂಗಮ್ಮ
ಅಕ್ಕಮ್ಮನ ಬೇಗ ಕರತಾರೆ.

↔ ↔ ↔ ↔

೩೪.

ಅತ್ತಿಗೆ ಹಿರಿಯಳೆಂದು ಎತ್ತಿ ಕೈ ಮುಗಿದನು
ಮುತ್ತಿನುಂಗುರದ ಮೈದುನ ನಿನ್ನಯ
ಅತ್ತಿಗೆ ಆಯುಷ್ಯ ಹರಸುವೆ.

↔ ↔ ↔ ↔

೩೫.

ಕಾಲುಂಗುರ ಕಣಕಣೆ! ನೇವಳ ಮಿಣಿಮಿಣಿ!!
ನಾವು ದೊಡ್ಡವರ ಸೊಸೆದಿರು ಬರುವಾಗ
ಸಾಲು ಮಾಳಿಗೆಯು ಸವನವು.

↔ ↔ ↔ ↔

೩೬.

ಕೊಲ್ಲುವರೆಂದರೆ ಬಲ್ಲರೆ ಮಕ್ಕಳು
ಬೆಲ್ಲದ ಅಚ್ಚು ಮರುಳನು ಕೊಟ್ಟರೆ
ಸುಮ್ಮನಾಗುವನು ಹಸುಬಾಲ.

++ ++ ++ ++

೩೭.

ತಾಕು ರೀಕಿನ ಕಟ್ಟು ಅದಕೆ ಚಿನ್ನದ ಕಟ್ಟು
ಸಾಕೋ ಅಣ್ಣಯ್ಯ ದೌಲತ್ತು ನಿನ್ನ ಸೂಳೆ
ಬೇಕಾದರೆ ಮನೆಗೆ ಬರುವಳು.

++ ++ ++ ++

೩೮.

ಸತ್ಯದೊಳ್ ತಾಯಮ್ಮ ತಕ್ಕದ ನಲ್ಲ ನಲ್ಲ
ಮುಕ್ಕಾದ ಗಂಡ ಮುದುಕನ ಮೋರೆಯ ನೋಡಿ
ನಾನ್ ಹೇಗೆ ವೇಳೆ ಕಳೆಯಲಿ.

++ ++ ++ ++

೩೯.

ಅರಸನೊಳ್ಳೆಯವನೆಂದು ಸರಸವಾಡಲು ಬೇಡ
ಬಿರುಸುಂಟು ಅವನ ಎದೆಯಲ್ಲಿ ತೆಂಗಿನ
ಕೋನೆಯಂತೆ ಕೊರಳ ಕೊಯ್ವನು.

++ ++ ++ ++

೪೦.

ಅಕ್ಕದಿರೆಲ್ಲ ಮುತ್ತಿನ ದಡಸಿಯ ತನಕ
ಮಿಕ್ಕಾದವರೆಲ್ಲ ಹೊಳೆತನಕ ಬಾಲಿಕೆಯ
ಅಣ್ಣದಿರೆಲ್ಲ ಮನೆತನಕ.

++ ++ ++ ++

೪೧.

ಎತ್ತು ನಿಂತ ಗದ್ದೆಯಲ್ಲಿ ಬಿತ್ತುತ ನಿಂತನ್ಯಾರೆ?
ಮುತ್ತಿನಂತ ಕಾಲು ನಿಡಿದೋಳು ಬಾಲಯ್ಯ
ಖಂಡ್ಗವ ಬಿತ್ತಿ ಕಾಡಿ ಬೆಳೆವ.

++ ++ ++ ++

೪೨.

ಸಿರಿ ಬಂದ ಕಾಲಕ್ಕೆ ತಲೆವಾಗಿ ನಡೆಯಮ್ಮ
ಮನೆಗೆ ಬಂದವರ ಕೂಡ್ರಹೇಳು ಮಕ್ಕಳ
ಒಡನೆ ಬಂದರ್ಗೆ ಊಟ ಹಾಕು.

++ ++ ++ ++

೪೩.

ಕೊಂಬಿಲ್ಲದಾನೆಗೆ ಕೊಂಬು ಬರುಸ್ವವೆಯೆಂದು
ಸಂಭ್ರಮ ನನ್ನ ಮನೆಯಲ್ಲಿ ಆತ್ಮನಿಗೆ
ಕೊಂಬೊಡೆದು ಬಂತು ಕೊನೆ ಮೀಸೆ.

++ ++ ++ ++

೪೪.

ಇಂದಿನ ಅಕ್ಕಿ ಯಾತರಿಂದ ಕಡಿದವು?
ಕುತ್ರಿಯು ಮುಗ್ಗಿ ಕೊಳೆ ಮುಗ್ಗಿ ಲಾಮನ
ಬಿತ್ತಣ ಹಿಂದಾಗೆ ಕಡಿದುವು.

++ ++ ++ ++

೪೫.

ಬಸುರು ಬಯಕೆ ಚಂದ! ಹಸುರು ಕುಪ್ಪಸ ಚಂದ!
ನಸುಗೆಂಪಿನಾಕೆಯ ನಗೆ ಚಂದ! ಅಕ್ಕಮ್ಮ
ಬಸುರಾದರೆ ಚಂದ ಬಳಗಕ್ಕೆ!

++ ++ ++ ++

೪೬.

ಕಾಸ್ಗನ ಕಾಯಿಯ ಕಾಲೊಳ್ತೂರುವನ್ಯಾರೋ
ಹಾಸ್ಯಗಾರ ನನ್ನ ಮೈದುನ ಮಾವನ ಮಗ
ಹಾಸ್ಯ ಮಾಡುವನು ಪರ ಹೆಣ್ಣ.

++ ++ ++ ++

೪೭.

ಅಂಥವರು ಮುನಿದರೆ ಪಂಥವು ನನಗಿಲ್ಲ
ಕುಂತಿ ಅತ್ತೆದಿರ ಕುವರರು ಮುನಿದರೆ
ಸಂತೋಷವಿಲ್ಲ ಮನದಲ್ಲಿ.

++ ++ ++ ++

೪೮.

ಅತ್ತೆಯು ಸಾಯಲಿ ಹತ್ತೆಮ್ಮ ಕರೆಯಲಿ
ಹಿತ್ತಲದೆ ಜೋಳ ಬೆಳೆಯಲಿ ನಮ್ಮನೆಯ
ಅತ್ತಿಗೆಯ ಕಣ್ಣು ಒಡೆಯಲಿ.

++ ++ ++ ++

೪೯.

ಅಣ್ಣನ ಹೆಂಡತಿ ಕಣ್ಣಿಗೆ ಚೆಲುವೆಯು
ಸುಣ್ಣದ ನೀರ ಒಲೆ ಮುಂದೆ ಇಟ್ಟುಕೊಂಡು
ಹಾಲನ್ನವೆಂದೇ ಬಡಿಸುವಳು.

++ ++ ++ ++

೫೦.



ರಾಗೀ ಬೀಸೆಂದರೆ ರೋಗ ಬಂತೆಂಬಳು
ರಾಗಿಯಂಬಲಿ ಕೆನೆಮೊಸರ ಉಂಬುವಾಗ
ಈಗ ನೋಡವಳ ಕೈ-ಬಾಯ.

++ ++ ++ ++

೫೧.

ಒನಕೆ ಒಳ್ಳೆಯದು ನೆಗೆದು ಕುಟ್ಟುವರಿಲ್ಲ
ಸೀರೆ ಒಳ್ಳೆಯದು ಸೆರಗಿಲ್ಲ ಅಣ್ಣನ ಮಡದಿ
ನಾರಿ ಒಳ್ಳೆ ರೂ ವಳು ಗುಣವಿಲ್ಲ.

++ ++ ++ ++

೫೨.

ಒನಕೆಗೆ ವಜ್ರ ಒರಳಿಗೆ ತಾಂಬೂಲ
ಗೇರುವ ಮೊರಕೆ ಜಗತರ ನಮ್ಮನೆಯ
ಸೊಸೆದಿರಿಗೆಲ್ಲ ದೊರೆತನ.

++ ++ ++ ++

೫೩.

ಅಕ್ಕನ ಕರೆಯೆಂದರೆ ಕತ್ತಲೆಯಾಯ್ತೆಂದ
ಕಟ್ಬಾಣಿ ಕೊರಳ ಮಡದಿಯ ಕರೆಯೆಂದರೆ
ತಿಂಗಳ ಬೆಳಕು ಹಗಲೆಂದ.

++ ++ ++ ++

೫೪.

ತಂಗಿಯ ಕರೆಯೆಂದರೆ ಸಂಜೆಯಾಯಿತೆಂದ
ಬಂಗಾರದ ಕೊರಳ ಮಡದಿಯ ಕರೆಯೆಂದರೆ
ಚಾಕ್ಲ್ರದ ಬೆಳಕು ಹಗಲೆಂದ.

++ ++ ++ ++

೫೫.

ಮುತ್ತೈದೆತನ ಬೇಡೆ ಮೂರ್ಸುತ್ತು ಬಲಗೊಂಬೆ
ಮುತ್ತಿನ ಮೂಗುತಿಯುರಸರಿಗೆ ಆಯುಷ್ಯಬೇಡೆ
ಮುತ್ತೈದು ಸುತ್ತ ಬಲಗೊಂಬೆ.

++ ++ ++ ++

೫೬.

ಊರಿಗೆ ಉಕ್ಕಳ ಜೋಳ ಯಾರಿಗೆ ಬಡತನ
ನಮ್ಮ ಪಾಡೇನು ಹಡೆದಮ್ಮ ಕುಂತಿಯ
ಧರ್ಮರಿಗೆ ಬಂದ ಬಡತನ.

++ ++ ++ ++

೫೭.

ಹಡೆದವ್ವ ಹಾಳೆಂದು ಧಡಧಡ ನಾ ಬಂದೆ
ಒಳಗೆ ಅಣ್ಣಯ್ಯನ ಮಡದಿಯು ದನಿಗೇಳಿ
ಹೊರ ಬಾಗಿಲಿಂದ ತಿರುಗಿದೆ.

++ ++ ++ ++

೫೮.

ಹಡೆದವ್ವನಿದ್ದಾಗ ನಡುಮನೆ ನನಗಿತ್ತು
ಕಡಗದ ಕೈಯು ಸೊಸೆ ಬಂದು ನಡೆದಾಗ
ತುದಿಗಟ್ಟೆ ನನಗೆ ಎರವಾಯ್ತು.

++ ++ ++ ++

೫೯.

ಗಿಡ್ಡರು ನಡೆದರೆ ಗಿಣಿ ಹಿಂಡು ನಡೆದಂತೆ
ಉದ್ದನ್ನ ಜಾಲೆ ನನ್ನ ತಂಗಿ ನಡೆದರೆ
ರುದ್ರನ ತೇರನೆಳೆದಂತೆ.

++ ++ ++ ++

೬೦.

ಚಿಂತಾಕ ಇಡಲಿಲ್ಲ ಚಿಂತೆ ಬಿಟ್ಟಿರಲಿಲ್ಲ
ಎಂಥಲ್ಲಿ ಕೊಟ್ಟೆ ಹಡೆದವ್ವ, ನಡುಮನೆ
ಜಂತಿ ಜರಿದಂತೆ ಜರಿದೆನು.

++ ++ ++ ++

೬೧.

ಹೇಸಿಗೆಯ ಬದುಕಿಗೆ ಆಶೆಯ ಮಾಡಲಿಲ್ಲ
ರೇಶಿಮೆಯನುಡುವ ದೊರೆ ನನ್ನ ರಾಯರ
ಆಸೆ ಮಾಡೇನು ಅನುಗಾಲ.

++ ++ ++ ++

೬೨.

ಓಲೇಕಾರ ನಿನಗೆ ಒಳ್ಳೇ ಹೆಂಡತಿ ಯಾಕೋ!
ನೀ ಹೋದೀ ರಾಜ್ಯ ತಿರುಗುತ್ತ ನಿನ್ನ ಮಡದಿ
ಬಾಡ್ಯಾಳು ಬಾಳೆ ಸುಳಿಯಂತೆ.

++ ++ ++ ++

೬೩.

ಕಪ್ಪು ಹೆಂಡತಿಯೆಂದು ಕರಕರಿ ಮಾಡಬೇಡ
ನೀರಲಹಣ್ಣು ಬಲು ಕಪ್ಪು ಇದ್ದರೂ
ತಿಂದು ನೋಡಿದರೆ ರುಚಿ ಬಹಳ.

++ ++ ++ ++

೬೪.

ಕೆಂಪು ಹೆಂಡತಿಯೆಂದು ಸಂತೋಷ ಪಡಬೇಡ
ಅತ್ತಿಯ ಹಣ್ಣು ಅತಿ ಕೆಂಪು ಇದ್ದರೂ
ಒಡೆದು ನೋಡಿದರೆ ಹುಳ ಬಹಳ.

++ ++ ++ ++

೬೫.

ಬಂಗಾರದ ಬಳೆಯಿಟ್ಟು ಬೈಬೇಡ ಬಡವರ್ಗೆ
ಬಂಗಾರ ನಿನಗೆ ಸ್ಥಿರವಲ್ಲ; ಮಧ್ಯಾಹ್ನ
ಬಿಸಲು ಹೊಳ್ಳುವದು ತಡವಿಲ್ಲ.

++ ++ ++ ++

೬೬.

ಅತ್ತೆ ಮಾವಗಂಜಿ ಸುತ್ತೇಳು ನೆರೆಗಂಜಿ
ಮತ್ತೆ ನೀ ಪತಿಯು ದನಿಗಂಜಿ ಇದ್ದರೆ
ಉತ್ತಮರ ಮಗಳು ಇವಳೆನರೆ!

++ ++ ++ ++

೬೭.

ಇಬ್ಬರ್ಹೆಂಡರಾದ ಏಡಿಯ ಮುಳ್ಳಾದ
ಕೋಡಗನಾದ ಕ್ರೂರವಾದ ಬಾಲೆಯರು
ಮಾಡಿಟ್ಟ ಸಿಂಬಿ ಅರಿವೆಯಾದ.

++ ++ ++ ++

೬೮.

ಅಂಜೂರ ಹಣ್ಣೆಂದು ತಂದು ತೂರಲು ಬೇಡ
ಹೆಂಡರಿಗೆ ಸಲಿಗೆ ಕೊಡಬೇಡ ತಮ್ಮಯ್ಯ
ಮುಂದೆ ನಿನ್ನ ಮಾತು ನಡೆಯದು.

++ ++ ++ ++

೬೯.

ಅಕ್ಕಿ ಸಣ್ಣೊರಳಿಗೆ ಮುತ್ತು ಸಣ್ಣ ಕೊರಳಿಗೆ
ನೇವಳ ಸಣ್ಣ ನಡುವಿಗೆ ತಮ್ಮನ
ಮಡದಿ ಸಣ್ಣ ಮನೆಯ ಕೆಲಸಕ್ಕೆ.

++ ++ ++ ++

೭೦.

ಕಂಚೀ ಹಣ್ಣು ಕಹಿಯೆಂದ ಲಿಂಬೆ ಹಣ್ಣು ಹುಳಿಯೆಂದ
ಮಾವಿನ ಹಣ್ಣು ಸೀಯೆಂದು ತಮ್ಮಯ್ಯ
ಮಾವನ ಮಗಳು ಮನಸೆಂದ.

++ ++ ++ ++

೭೧.

ಅತ್ತಿಗತ್ತಿಗೆ! ಅಣ್ಣ ಹೇಳಿದ ಮಾತೇನೆ?
ಮುತ್ತಿನ ಮಣಿಯ ಮಗಳನ್ನು ಕೊಡುವೆನೆಂದು
ಮುಟ್ಟಿದ ಹರಿಯುವ ಜಲಧಿಯ.

++ ++ ++ ++

೭೩.

ಗಾಳಿ! ಗಾಳೀ! ಕೇಳೆ ಗಾಳೀ ಮಂಕಾಳಿ ಕೇಳೆ!
ಸೂಳೇರ ಕೇರಿಯ ಸುಡಬೇಕು ಗಾಳಿಯೆ!
ಜಾಣರ ಕೇರಿಲಿ ಇರಬೇಕು.

⊷ ⊷ ⊷ ⊷

೭೪.

ಸಣ್ಣ ಸರ್ಪನ ಮರಿ ಸಣ್ಣಕಿದ್ದರೇನು?
ಸಣ್ಣಕಿದ್ದರೂ ವಿಷ ಬಹಳ ಅತ್ತಿಗೆ
ಸಣ್ಣವಳ ಕೆಣಕಿ ಕೆಡಬೇಡ.

⊷ ⊷ ⊷ ⊷

೭೫.

ಹೀನಗೆಟ್ಟ ಹೆಣ್ಣಿಗೆ ಏನಮಾಡಿದರೇಲ್ಲ
ಏಣಿಯಲಿ ಕೊಂದರೂ ಉರಿಯಿಲ್ಲ ಆ ಹೆಣ್ಣಿಗೆ
ಏನು ಮಾಡುವರು ಬಳಗದವರು.

⊷ ⊷ ⊷ ⊷

೭೬

ಕೊಟ್ಟು ಕುದಿಯಬೇಡ ಮಾಡಿ ಹಂಗಿಸಬೇಡ
ಇಷ್ಟುಂಡರೆಂದು ಅನ್ನಬೇಡ ಮೂರು ಮಾತು
ಮುಟ್ಟುವದು ಶಿವನ ಬಳಿಯಲ್ಲಿ.

⊷ ⊷ ⊷ ⊷

೭೬.

ಬಾಳೆಯ ಬುಡದಲ್ಲಿ ಬಾಳೆಯ ಸಸಿ ಹುಟ್ಟಿ
ಬಾಳಿಗೆ ಹಬ್ಬಿದವು ಶತಬಳ್ಳಿ ಬಾಲಕನ
ತೋಳಿಗೆ ಹಬ್ಬಿದವು ಬಿಳಿ ಚಿಬ್ಬು.

++ ++ ++ ++

೭೭.

ನೀರಿಲ್ಲದ ಕೆರೆಯಲ್ಲಿ ಬೇರಿಲ್ಲದ ಸಸಿ ಹುಟ್ಟಿ
ದಾರವಿಲ್ಲದೆ ಮುತ್ತ ಸುರಿದಳು ತಾವೀಗ
ಮುಂಡೆಯಿಲ್ಲದೆ ದಂಡೆ ಮುಡಿದಳು.

++ ++ ++ ++

೭೮.

ರಾಜಂಗಳ ಭತ್ತನ ಪೂಜೆ ಮಾಡಿ ಬರುವೆ
ರಾಜ ಕುಮಾರನ ಮದುವೆಗೆ ತಾಯಮ್ಮ
ರಾಜ ಕುಂದಣದ ವೀಳ್ಯ ಕೊಡುವಳು.

++ ++ ++ ++

೭೯.

ಕೆಂಡಬ್ಬರಿಗಿ ಹೂವ ಕಂಡಲ್ಲಿ ಕುಯ್ಯ ಬಾರ
ಮುಂಡಾಸದ ಮೇಲೆ ಮುಡಿಬಾರ ತಮ್ಮಯ್ಯ
ಹೆಂಡತಿಗೆ ಸಲಿಗೆ ಕುಡಬಾರ.

++ ++ ++ ++

೮೦.

ನನಗಾಗದ್ವೈರಿಯ ನೆನೆದ ಕಾರಣವೇನು?
ಮದವೇರಿ ಬೆಳೆವ ಹರಿಗೆಯ ದೊಗ್ಗಳೆ
ಮನೆಗೆ ಕಂಬಾಗಿ ಯೆಸೆವುದೇ?

೮೧.

ಅತ್ತೆ ನಿನ್ನ್ಯೋರಿ ಸುಣಗೆಯ ಪುಡಿಯಂತೆ
ಸ್ಮಶಾನಕ್ಹೋಗ್ವ ದಿನ ಬಂತು ಅತ್ತೆಯಮ್ಮ
ಈ ಬುದ್ಧಿ ನಿನಗೆ ತರವಲ್ಲ.

೮೨.

ಮಜ್ಜನದ ಹೊತ್ತಿಗೆ ಬಯ್ಯದಿರು ಮಕ್ಕಳ
ಕೊಲ್ಲದಿರು ಗಂಟೆಯ ಕರುಗೋಳ ದಾಬಣಿಯ ಮೇಲೆ
ಪಗಡೆಯಾಡುವುದು ಸಿರಿ ದೇವಿ.

೮೩.

ಮಾಡಬಾರದ ಕೆಲಸವ ಮಾಡೆಂದಳತ್ತೆಯಮ್ಮ
ಕರಡಿ ಕಟ್ಟಿ ಹಾಲ ಕರೆಯೆಂದಳು ದೇವರೇ
ಹುಲಿಯ ಮುಂಗಾಲ ಹಿಡಿಯೆಂದಳು.

೮೪.

ಹಳ್ಳದಾ ಅಂಚಿಗೆ ನಿಲ್ಲ ಬೇಡ ಬಾಲಯ್ಯ
ಚಿಕ್ಕೆಯುಂಗುರದ ಬೆಳಕಿಗೆ ಬಾಲಯ್ಯ
ಬೆಳ್ಳಕ್ಕಿ ನೀರ ಕುಡಿಯವು.

++ ++ ++ ++

೮೫.

ಬಂದ ಸಿರಿದೇವಿ ಅಂಗಳದಲ್ಯಾಕೆ ನಿಂತೆ?
ತಾವುಂಟು ನನ್ನ ಜಗಲಿಯಲಿ ಬಾಲಕನ
ತೊಳ ಮೇಲಾಡಿ ಇರಬಹುದು.

++ ++ ++ ++

೮೬.

"ಅವಳ ತಾ" ಎಂದರೆ ಇವಳನೇಕೆ ತಂದೆಯೋ?
ಬಸವ ಪಟ್ಟಣದ ಬಸವಿಯ ತಂದರೆ
ಬಸವಪ್ಪನಿಗೆ ನೀರನೆರೆಯಳು.

++ ++ ++ ++

೮೭.

ಗಂಜಿಯನು ಇಕ್ಕುವಾಗ ಅಂಜುವುದು ಯಾತಕ್ಕೆ?
ಗಂಜಿಯಲ್ಲೊಂದೂ ಅಗಳಿಲ್ಲ ಅತ್ತೆಯಮ್ಮ
ನೀನುಣ್ಣೆ ನಿನ್ನ ಮಗನುಣ್ಣೆ.

++ ++ ++ ++

೮೮.

ಅಂಕಕ್ಕೆ ಸಾಕಿದ ಕೋಳಿ ಅಂಕದೊಳರ್ಜುನ
ನಾ ಸಾಕಿದ ಕೋಳಿ ಪಡೆಹುಂಜ ಸರಗೆಯ್ಯೆ
ಲಂಕಾಪಟ್ಟಣವೆಲ್ಲ ಬೆಳಗಕ್ಕು.

++ ++ ++ ++

೮೯.

ಕೋಳಿ ಕೂಗಿದುವು ಕುಂಬಳ ಹೂವಿಗೆ
ಬೆಟ್ಟ ಕೂಗಿದುವು ಬಿದಿರಿಗೆ ಬಾಲಕನ
ಕತ್ತಿ ಮಿಂಚಿದುವು ಕಡತಕ್ಕೆ

++ ++ ++ ++

೯೦.

ಸೂಳೆಗಿಕ್ಕುವ ಚಿನ್ನ ನಾರಿಗಿಕ್ಕೆಲೋ ತಮ್ಮ
ನಾಳೆ ನಿನ್ನೊಡನೆ ತಿರುಗುವಳು ನಮ್ಮೂರ
ಭೂಮಿಗೆ ಹಾಕಲು ಬೆಳೆವುದು.

++ ++ ++ ++

೯೧

ಬಡವಿಯ ಮಕ್ಕಳು ನಡೆದರಿ ಸಂತೋಷ
ಹುಡಿಯಾಡಿ ಮನೆಗೆ ಬರುವಾಗ ತಾಯಿಗೆ
ಬಡತನದ ಜಾನ ಮರೆಯಿತು.

++ ++ ++ ++

೯೨.

ಬೆಲ್ಲ ಕೊಟ್ಟವ್ವಗೆ ಎಲ್ಲ ಭಾಗ್ಯವು ಬರಲಿ
ಪಲ್ಲಂಗದ ಮೇಲೆ ಮಗ ಬರಲಿ ಮನೆಗೆ
ಮಲ್ಲಿಗೆಯ ಮುಡಿವ ಸೊಸೆ ಬರಲಿ.

++ ++ ++ ++

೯೩.

ಅಂಗಳದಲ್ಲೊಂದು ಲಿಂಗ ಮೂರುತಿ ಮೂಡಿ
ಮಂಗಳಾರತಿಯ ಬೆಳಗುತ್ತ ಬೇಡಿಕೊಂಬೆ
ಮಾರಾಯರ ಮುಂದೆ ಮರಣವೇ.

++ ++ ++ ++

೯೪.

ಮಡದಿಯ ಹೊಡೆದವ ಮನದಲ್ಲಿ ಎಣ್ಣಿದ
ಸುಣ್ಣದ ನೆವ ಮಾಡಿ ಒಳಗೆ ಹೋಗಿ ತಾನೆಂದ
ಎಣ್ಣಬೇಡ ಮಡದಿ ಮನದಲ್ಲಿ

++ ++ ++ ++

೯೫.

ಭಾಗ್ಯವುಳ್ಳವರ ಮನೆಯ ಬಾಗಿಲ ನೋಡಿ
ನೇಗಿಲು ನೂರು ಕುಳು ನೂರು ಮತ್ತಿನ್ನು
ಹೂಡುವ ಎತ್ತು ಐನೂರು.

++ ++ ++ ++

೯೬.

ದಾಸಾಳ ಹೂವಿನ ವಾಸನೆಗೊಂಡವನ್ಯಾರೋ?
ವಾಸನೆಯಿಲ್ಲ ಬರಿ ಹೂವು ಪರರ ಹೆಣ್ಣಿಗೆ
ಮನಸು ಮಾಡಿದರೂ ಫಲವಿಲ್ಲ.

೯೭.

ಮೂಡಣ ದಿಕ್ಕಿಗೆ ನೋಡವ್ವ ಗಿಳಿಗಳ
ಗಿಳಿಗಳ್ಗೆ ತಕ್ಕಾದ ಮರಿಗಳ ತಾಯವ್ವ
ಮಗವಿರಿಗೆ ತಕ್ಕಾದ ಸೊಸೆದಿರು.

೯೮.

ಮುಜ್ಜನಕ್ಕರಳುವುದು ಮಜ್ಜ ಮಲ್ಲಿಗೆ ಹೂವು
ಸುಗ್ಗಿಗರಳುವುದು ಸುರಗಿಯು ಸೇವಂತಿಗೆ
ನುಗ್ಗುವದು ಬಾಲೆಯ ಜಡೆಯಲ್ಲಿ.

೯೯.

ಉಪ್ಪಿಲ್ಲದುಣ್ಣನು ಉಪಚಾರದ ಬಾಲಯ್ಯ
ಉಪ್ಪರಿಗೆಯಿಲ್ಲದೆ ಒರಗನು ಬಾಲಯ್ಯ
ಹೊತ್ತು ಇಲ್ಲದೆ ದಾರಿ ನಡೆಯನು.

೧೦೦.

ಮುಟ್ಟು ಮುಟ್ಟೀದು ಮೂರ್ನೀರ ಮಿಂದಳು
ಮುತ್ತ ಕಟ್ಟಿ ಹೂವ ಮುಡಿದಳು ಬಾಲಮ್ಮ
ಮುತ್ತಿನ ಗರ್ಭವೇ ಹುರಿಯಲಿ.

++ ++ ++ ++

೧೦೧.

ಬಾಳೇಹಣ್ಣಿನಂತೆ ಬಾಲಕನ ಮೈ ಚಂದ
ಏನುಂಡು ಈ ಮಗನ ನೀ ಹಡೆದೆ? ತಗ್ರುಮನೆಯ
ಹಾಲುಂಡು ಹಸುರು ಬಳಿಯಿಟ್ಟು.

++ ++ ++ ++

೧೦೨.

ಗಂಡನೆಂಬುವವ ಒಂದು ರಾಶಿ ಚಿನ್ನ
ಚೊಕ್ಕಳ್ಳ ಚಿನ್ನ ಪುತ್ತಲಿಯು ಬಾಲಿಕೆಗೆ
ಗಂಡ ಸಿಕ್ಕಿದನು ದೊರೆರಾಯ.

++ ++ ++ ++

೧೦೩.

ಬಲಗೈ ಒನಕೆಯು ನೆಗೆದು ಮೆರೆಯುವ ಹೆಣ್ಣೆ!
ಕೂಡಿ ಮೆರೆಯುವರಿಗೆ ಅಲಸಿಕೆ ಭೀಮನ
ಬಲಗೈಯ ಶಕ್ತಿ ನಿನಗಕ್ಕೆ.

++ ++ ++ ++

೧೧೪.

ಭಾವನ ಮಾತು ಬಾಳೆಹಣ್ಣಿನ ಹಾಗೆ
ಅಕ್ಕನ ಮಾತು ಕುಜರಾತು ನಮ್ಮನೆಂಯ
ಅತ್ತಿಗೆಯ ಮಾತು ಉರಿಮೆಣಸು.

++ ++ ++ ++

೧೦೫.

ನಿನ್ನೆಗೆ ಮೊನ್ನೆಗೆ ನನ್ನಮ್ಮನ ಜಾನವಾಗೆ
ಕಣ್ಣಿಗೆ ನಿದ್ದೆಯೋ ಬರಲಿಲ್ಲ ತಾಯಮ್ಮ
ನಿನ್ನ ಜಾನದಲಿ ಒರಗಿದೆ.

++ ++ ++ ++

೧೦೬.

ಅಡಿಯ ಜಂಚಿನ ಗದ್ದೆ ಮಡದ್ಹಾಗಿ ಬಿದ್ದುವು
ಗದ್ದೆ ತಿಂದಿತಲ್ಲೋ ಎಳೆಗರು ಅಣ್ಣಯ್ಯನ
ಬುದ್ಧಿ ತಿಂದಿತಲ್ಲೋ ನೆರೆಮನೆ.

++ ++ ++ ++

೧೦೭.

ಊರ ಮೇಲಿನ ಊರು ದೂರೇನೋ ತಮ್ಮಯ್ಯ
ಬಾರದೆ ಹೋದೆ ನೀನೆಂದು ತಮ್ಮಯ್ಯ
ಬೇಡೆಂದಳೇನೋ ನಿನ್ನಡದಿ.

++ ++ ++ ++

೧೦೮.

ಚಿಂತೆ ಬಯಲಾಗಲಿ ಸಂತೋಷ ನಮಗಾಗಲಿ
ಕಂಚಿನುಪ್ಪರಿಗೆ ಎರಡಾಗಲಿ ಭಾವಂಗೆ
ಪಂತೀಲಿ ಆಡುಂಬ ಮಗಳಾಗಲಿ.

++ ++ ++ ++

೧೦೯.

ಹೊಟ್ಟೆಯ ಅನ್ನಕ್ಕೆ ಉಟ್ಟದೊಂದರಿವೆಗೆ
ಕೊಟ್ಟನೇಂ ಅಪ್ಪಯ್ಯ ಹೊರೆಯಾಗಿ ಪರರ ಮನೆಯ
ಕಷ್ಟಮಾಡಿ ಹೊಟ್ಟೆ ಹೊರಿಯೆಂದು.

++ ++ ++ ++

೧೧೦.

ಕಷ್ಟ ಬಂತೆಂದು ಕೊಟ್ಟವರಿಗೆ ಬಯ್ಯಬೇಡ
ಕೊಟ್ಟಿಗೆ ಸೇರಿ ಅಳಬೇಡ ಬಾಲಮ್ಮ
ಕೊಟ್ಟವರ ಆಯುಷ್ಯ ಹಿರಿದಾಗಲಿ.

++ ++ ++ ++

೧೧೧.

ಹೆಣ್ಣಿದ್ದ ಮನೆಗೆ ಕನ್ನಡಿ ಯಾತಕ್ಕೆ?
ಹೆಣ್ಣು ಸಣ್ಣವಳು ಒಳಗಿರಲು ನಂದಿನಿಯು
ಕನ್ನಡಿಯ ಹಾಗೆ ಹೊಳೆಯುವಳು.

++ ++ ++ ++

೧೧೨.

ಒಳ್ಳೊಳ್ಳೆ ಕೇದುಗೆ ಮುಳ್ಳಲ್ಲ್ಯಾಕೆ ಮೂಡಿದೆ
ಎಲ್ಲೆಲ್ಲಿ ಹೋದೊಡಲ್ಲಲ್ಲಿ ಪರಿಮಳ
ಹಾರಿ ಬಾ ನಮ್ಮ ತುರುಬಿಗೆ.

++ ++ ++ ++

೧೧೩.

ಜಾಜೀ ಹೂವಿನ ಮಾಲೆ ಮಾಡಿಸಿ ಕೊಡುವೆ
ನನ್ನ ಬಾಲರು ಕೂಡಿ ಚೌಲವ ಬೀಸುವರು
ಭಾಗ್ಯ ಕೊಡು ದೇವ ಮನೆಯಲ್ಲಿ.

++ ++ ++ ++

೧೧೪.

ಸಂಪಿಗೆ ಹೂವಾ ಕಂಪಿಗೆ ದಂಡೆ ಕಟ್ಟಿ
ರಂಬೆಯರ ಕೈಲಿ ಚೌಲವ ಬೀಸೆಂಬೆ
ಸಂಪತ್ತು ಕೊಡು ಲಕ್ಷ್ಮಿ ಮನೆಯಲ್ಲಿ.

++ ++ ++ ++

೧೧೫.

ಸೆರಗನ್ನು ಬಿಡು ನನ್ನ ಸೆರಗಿನ ಕಂದಯ್ಯ
ನಿರಿಯನ್ನು ಬಿಡು ನನ್ನ ರಘುರಾಮ ರಾಮಪ್ಪ
ಕಡಲಿಸು ಕೊಡುವೆ ನಡೆ ಮುಂದೆ.

++ ++ ++ ++

೧೧೬.

ಸಿಟ್ಟು ಮಾಡಲು ಬೇಡಿ ಮುತ್ತಿನಂಥ ಪತಿಗಳೇ
ಕಟ್ಟಿ ಹೋಗಲು ಬೇಡಿ ಕದನವ ನಮ್ಮಪ್ಪ-ನಮ್ಮವ್ವ
ಕೊಟ್ಟಿಹರು ನಿಮ್ಮ ಕೈ ವಶಕೆ.

++ ++ ++ ++

೧೧೭.

ಮುತ್ತಿನ ಮೂಗುತಿಯ ನಮ್ಮಪ್ಪ ಮಾಡಿಸಿಕೊಟ್ಟ
ಮುತ್ತೈದೆತನವ ಶಿವ ಕೊಟ್ಟ ಮೇಲೆ ಬಹ
ಭಾಗ್ಯವನು ಕೊಟ್ಟ ಶ್ರೀ ಹರಿಯು.

++ ++ ++ ++

೧೧೮.

ಹೆರವರ ಹೆಣ್ಣಿಗಾಗಿ ಹೊರಗೆ ಮಲಗುವ ಜಾಣ
ಮರದ ಮೇಲೆರಡು ಗಿಣಿ ಕೂತು ನುಡಿದವು
ಎರವನ್ನು ರಾಯ ನಿನ್ನ ಜೀವ.

++ ++ ++ ++

೧೧೯.

ಗೋಕುಲದಲ್ಲಿ ಗೂಕೆಂಬುದೇನಮ್ಮ ?
ಗೋಪಾಲ ಕೊಳಲನೂದುತ್ತ ಬರುವಾಗ
ಗೋಪೇರು ಕದವ ತೆರೆಯುವರು.

++ ++ ++ ++

೧೨೦.

ಸಂಪಿಗೆ ಹೂವಿಲ್ಲದೆ ಸುಂಪಿಲ್ಲ ನಮ್ಮ ಮಂಡೆ
ಸಂತೆಗೆ ಹೋದ ಹಿರಿಯಣ್ಣ ಬರುವನಕ
ಸಂತೋಷವಿಲ್ಲ ಮನದಲ್ಲಿ.

++ ++ ++ ++

೧೨೧.

ಅತ್ತೆಯಾ ಮನೆಯಲ್ಲಿ ಹತ್ತೆಂಟು ಬೈದರೂ
ಉತ್ತರವನ್ನು ಕೊಡಬೇಡ ಮಗಳೇ
ಉತ್ತಮರ ಹೆಸರ ಕೆಡಿಸದಿರು.

++ ++ ++ ++

೧೨೨.

ಇದ್ದರೆ ಇರಬೇಕು ಬುದ್ಧಿವಂತರ ನೆರೆಯಲಿ
ಕುದುರಗೇಡಿ ಕುಲಗೇಡಿ ನೆರೆಯಿದ್ದು ತಮ್ಮಯ್ಯ
ಇದ್ದಷ್ಟು ಬುದ್ಧಿ ಕಳಕೊಂಡ.

++ ++ ++ ++

೧೨೩.

ಸೊಸೆಯು ಬರುವಳೆಂದು ಖುಷಿ ಬಹಳ ಮನದಲ್ಲಿ
ಸೊಸೆ ಬಂದು ಮಗನ ಕಸಕೊಂಡು ಬಾಳ್ವಾಗ
ಮುಗಿಲಿಗೆ ಬಾಯ ತೆಗೆದಳು.

++ ++ ++ ++

೧೨೪.

ಹಚ್ಚಿದ ಮಾತಿಗೆ ಹರಿವ ಗಂಗೆರಡಾಗಿ
ನಿಚ್ಚಳ ಮನವು ವಿಷವಾಗೆ ಒಳಗೊಳಗೆ
ಹಚ್ಚಿದವರಾರು ಕದನವನು.

++ ++ ++ ++

೧೨೫.

ಗಂಡ ಸತ್ತ ಬಳಿಕಿನ್ನು ಗಂಧ ಕುಂಕುಮವೇಕೆ?
ಬಂಗಾರವೇಕೆ? ಬಳೆಯೇಕೆ? ಕೊರಳಿನ
ಸಿಂಗಾರ ಶಿವನೆ ಕಸಕೊಂಡ.

++ ++ ++ ++

೧೨೬.

ಕಟ್ವಾಣಿ ಗುಂಡಿಗೆ! ಸಿಟ್ಟು ಮಾಡಲು ಬೇಡಿ
ಬಿಟ್ಟು ಬಂದಿಹೆನು ಬಳಗವ ಪತಿಗಳೇ
ಕಟ್ಟಿಹರು ನಿಮ್ಮ ಪದರಿನಲಿ.

++ ++ ++ ++

೧೨೭.

ಬಟ್ಟಲಗಣ್ಣಿನಿಂ ದಿಟ್ಟಿಸಿ ನೋಡಲು
ಸಿಟ್ಟೇಕೋ ರಾಯ ನನ್ನ ಮೇಲೆ ನಾನಂಥ
ಹುಟ್ಟಿಸಾಡುವರ ಮಗಳಲ್ಲ.

++ ++ ++ ++

೧೨೮.

ಹಣೆಯು ಬರೆಹದ ಗೆರೆಯು ಹರಿದರೂ ತಪ್ಪದು
ಹರಿಶ್ಚಂದ್ರರಾಯ ಸುಡುಗಾಡ ಸೇರಿದರೂ
ವಿಧಿಯವನ ಬೆನ್ನ ಬಿಡಲಿಲ್ಲ.

೧೨೯.

ತಾವರೆಯ ಗಿಡ ಹುಟ್ಟಿ ದೇವರಿಗೆ ನೆರಳಾಯ್ತು
ನಾನ್ಹುಟ್ಟಿದ ಮನೆಗೆ ಎರವಾದೆ ಹಡೆದವ್ವ
ನೀ ಕೊಟ್ಟ ಮನೆಗೆ ಹೆಸರಾದೆ.

೧೩೦.

ತಾಯ ಕಾಣದ ಜೀವ ತಾವೂರಿ ಬಾವೂರಿ
ಬಾಳ ಬಿಸಲಿನ ಅವರೆಯ ಹೂವಿನಂತೆ
ಬಾಡುವೆನು ತಮ್ಮ ಕರೆದೊಯ್ಯೋ.

೧೩೧.

ಅಡಿ ಉಂಬವ ಕೆಟ್ಟ ಕೇಡನೆನೆದವ ಕೆಟ್ಟ
ನೋಡದವ ಕೆಟ್ಟ ಬೆಳೆ ಭೂಮಿ ಪರಸತಿಯ
ಮುಖ ನೋಡಿ ಕೆಟ್ಟ ಕುಲಗೇಡಿ.

೧೩೨.

ಅತ್ತಿಗೆಯು ತಾಯಲ್ಲ ಹಿತ್ತಾಳಿ ಚಿನ್ನಲ್ಲ
ಉತ್ತರಣೆ ಗಿಡವು ಮರವಲ್ಲ ಹೆಣ್ಮಕ್ಕಳಿಗೆ
ಹುಟ್ಟಿದ ಮನೆಯೇ ನಿಜವಲ್ಲ.

++ ++ ++ ++

೧೩೩.

ಸಂತೆ ಸೂಳೆಯ ನಂಬಿ ಮನೆಯ ಹೆಂಡತಿ ಬಿಟ್ಟು
ಬಾಗಿಲಲ್ಲಿ ಬೆಳೆವ ಬದನೆಯ ಕಾಯ್ನಂಬಿ
ಕರಿವೆಮ್ಮೆ ಬಿಟ್ಟ ಕುಲಗೇಡಿ.

++ ++ ++ ++

೧೩೪.

ಮಕ್ಕಳಿಗೆ ತಾಯಾಸೆ ಪಕ್ಷಿಗೆ ಗೂಡಾಸೆ
ಮಕ್ಕಿಯ ಕೆಯ್ಗೆ ಮಳೆಯಾಸೆ ಹೆಣ್ಮಕ್ಕಳಿಗೆ
ಪೋಪೆನೆಂಬಾಸೆ ತವರಿಗೆ.

++ ++ ++ ++

೧೩೫.

ಆಯುಷ್ಯದೋಲೆಯು ಆರೆಕ್ಕಟ್ಟರಿನಗ್ಗೇಳು
ನಾರಾಯಣ ಕೊಟ್ಟ ಶಿವ ಕೊಟ್ಟ ಓಲೆಯು
ಯಾರಿಗೂ ಓದಲು ತಿಳಿಯದು.

++ ++ ++ ++

೧೩೬.

ಆಯುಷ್ಯ ಹಿರಿದೆಂದು ಹಾರಿದನೆ ಸಮುದ್ರವ
ಆಕಾಶದಂಥ ತೆರೆ ಬಂದು ಬಡಿವಾಗ
ಈಶ್ವರನೆ ನಿನ್ನ ಮರೆಯಪ್ಪ.

++ ++ ++ ++

೧೩೭.

ಹರಿದಾಡಿ ಬಪ್ಪಾಗ ಹಲವು ದೇವರು ಕಾಯ್ಲಿ
ಹರಿದಾಡೊಂದೆಲೆಯ ಮೇಲುವನಕ ನಮ್ಮನೆಯ
ಮನೆ ದೇವರ್ ಕಾಯ್ಲಿ ಅನುದಿನ.

++ ++ ++ ++

೧೩೮.

ಕಣ್ಣು ಕಾಣದು ಕಷ್ಟ ಕಿವಿಯು ಕೇಳದು ಕಷ್ಟ
ಯಾವುದಕ್ಕೂ ಕಷ್ಟ ಬಡತನ ಬಂದರೆ
ಕೂಡ್ರೆಂಬರ್ ಹೊಳ್ಳಿಯ ತುದಿಯಲ್ಲಿ.

++ ++ ++ ++

೧೩೯.

ತಾಯ್ತನ್ನ ಮಕ್ಕಳ ಯಾವಾಗ ನೆನೆವಳು?
ಉಂಬಾಗ ಮಡಿಯನುಡುವಾಗ ಹಿತ್ತಲದ
ಹೂವ ಕಂಡಲ್ಲಿ ನೆನೆವಳು.

++ ++ ++ ++

೧೪೦.

" ಹರಹರ " ಎಂದು ಹರಿವ ಗಂಗೆಯ ಮಿಂದೆ
" ಶಿವಶಿವ " ಎಂದು ಮುಳುಗಿದೆ ಸಮುದ್ರವ
ತೆರೆ ಬಂದು ಪಾಪ ಕಳೆದುವು.

++ ++ ++ ++

೧೪೧.

ಹಾಡಬೇಕು ಹರಿಯೆಂದು ಬೇಡಬೇಕು ಶಿವನೆಂದು
ಪಾಲಿಸಬೇಕು ಅರಸರು ಮಾಡಿದ ಬದುಕ
ತಾವುಂಡು ದಾನ ಕೊಡಬೇಕು.

++ ++ ++ ++

೧೪೨.

ಅಣ್ಣನ ಕೂಡ ಬಣ್ಣಿಸಿ ಮಾತಾಡಿ
ಸಣ್ಣ ಮೂಗುತಿಯ ಕಿರಿದಂಗಿ ನಂದಿನೀ
ಬಣ್ಣದ ಸೀರೆಯನುಡುವಳು.

++ ++ ++ ++

೧೪೩.

ಕುದುರೆಯನ್ನು ಕುಣಿಸುತ್ತ ಆನೆಯನ್ನು ನಡೆಸುತ್ತ
ಅರಗಿಣಿಗೆ ಮಾತ ಕಲಿಸುತ್ತ ಬರುವನು
ಬರಿಗೊಡದಮ್ಮಾ! ಬದಿಗಾಗು.

++ ++ ++ ++

೧೪೪.

ಮಕ್ಕಳಿಲ್ಲದ ಮನೆ ಹೊಕ್ಕರೆ ಬಿಣ್ಣಗೆ
ಇಟ್ಟ ಶೀಡಳಿಯ ಮನೆಯಂತೆ ಆ ಮನೆಯ
ಹೊಕ್ಕುಣ್ಣೆನೆಂಬಳು ಶ್ರೀ ದೇವಿ.

++ ++ ++ ++

೧೪೫.

ಅಣ್ಣ ಬಾರರ್ಜುನ ತಮ್ಮ ಬಾ ಸಹದೇವ
ಹೊನ್ನ ಬಿಲ್ಹಿಡಿದ ಕಲಿಭೀಮ ಬಾರೆಂದು
ಬಣ್ಣಿಸಿ ಕುಂತಿ ಕರೆಯುವಳು.

++ ++ ++ ++

೧೪೬.

ಹಸಿವಾದ ಮಕ್ಕಳ್ಗೆ ಹತ್ತರಿಲ್ಲೂ ಮನೆ ಕಾಣೆ
ಹಸಿವ ಬಲ್ಲಮ್ಮ ಒಳಗಿಲ್ಲ ತೊಟ್ಟಿಲದ
ಶಿಶುವ ಕಂಡ್ಹಸುವು ಅಡಗಿತು.

++ ++ ++ ++

೧೪೭.

ಹೆಣ್ಮಕ್ಕಳ್ ಹುಟ್ಟಿದರೆ ಪರರಿಗೆ ಸೊಸೆಯಕ್ಕು
ಗಂಡು ಮಕ್ಕಳ್ ಹುಟ್ಟಿ ಮನೆಯಕ್ಕು ಅಪ್ಪಯ್ಯ
ಎಲ್ಲಿಗ್ಹೋದರೂ ನಿನ್ನ ಹೆಸರಕ್ಕು.

++ ++ ++ ++

೧೪೮.

ಹುಟ್ಟುವಾಗ ತರಲಿಲ್ಲ ಪೋಗುವಾಗ ಒಯ್ಯಲಾರೆ
ಸುಟ್ಟು ಸುಟ್ಟು ಸುಣ್ಣದ್ಹರಳಾಯ್ತು ದೇಹವು
ಕಷ್ಟವನು ಬಿಡಿಸೊ ಸೃಷ್ಟಿಗೊಡೆಯ!

++ ++ ++ ++

೧೪೯.

ಮಕ್ಕಳುಂಟೆಂದು ಮಡಿಗಳುಂಟೆಂದು
ನಚ್ಚಬೇಡ ಮನವೆ! ಏನಿಲ್ಲ ನಿನಗಿಲ್ಲಿ
ನಿಚ್ಚ ಪುರಂದರ ವಿಠಲನೆನ್ನು.

++ ++ ++ ++

೧೫೦.

ಹೂವು ಕೊದಲಿಗೆ ಚಂದ! ಮುತ್ತು ಕೊರಳಿಗೆ ಚಂದ!
ನಕ್ಷತ್ರ ಚಂದ ಗಗನಕ್ಕೆ; ಕಂದಯ್ಯ
ನೀ ಚಂದ ನಿನ್ನ ವಂಶಕ್ಕೆ.

++ ++ ++ ++

ಸಂಪೂರ್ಣ.



ಪುಸ್ತಕ ದೊರೆಯುವ ಸ್ಥಳಗಳು:—

(೧) ಐ. ಆರ್. ಶಿವನಾಗಪ್ಪಾ.

ವಾಗ್ವಿಲಾಸ ಬುಕ್ ಡಿಪೋ ಹುಬ್ಬ

(೨) ಐ. ವಿ. ತೊರ್ಕೆ.

ಕನ್ನಡ ಶಾಲಾ ತೊರ್ಕೆ.

ಪೋಸ್ಟ:- ಸಾಣೇಕಟ್ಟಾ. ಉತ್ತರಕನ್ನ

(೩) ನಂದಿನೀ ಪುಸ್ತಕಾಲಯ,

ಶ್ರೀ ಕ್ಷೇತ್ರ ಗೋಕರ್ಣ.

